# ಯೋಜನೆಗೆ ಕಾಲ ಸನ್ನಿಹಿತ

-ನವಲೇಶ್ ಕುಮಾರ್

ಕಳೆದ ಅನೇಕ ದಿನಗಳಿಂದ ನಾನು ನನ್ನ ಕ್ಷೇತ್ರ ಭೇಟಿಯ ಕಾರ್ಯದಲ್ಲಿ ತೊಡಗಿದ್ದು ಈ ಸಂದರ್ಭದಲ್ಲಿ ಅನೇಕ ಮಂದಿ ಶಿಕ್ಷಕರ ಜೊತೆ ಮಾತುಕತೆ ನಡೆಸಲು ಅವಕಾಶ ಸಿಕ್ಕಿತ್ತು. ಶಿಕ್ಷಕರಂತೂ ಶಾಲೆಗಳು ಪುನರಾರಂಭವಾಗಲಿ ಎಂದು ತುದಿಗಾಲಲ್ಲಿ ನಿಂತಿದ್ದರು ಎಂದು ಹೇಳಬಲ್ಲೆ. ಯಾವುದೇ ತಂತ್ರಜ್ಞಾನ ಬಂದರೂ ಕೂಡ ಮುಖಾಮುಖಿ ಕಲಿಕೆಗೆ ಪರ್ಯಾಯವಾದುದು ಯಾವುದೂ ಇಲ್ಲ ಎಂಬುದು ಶಿಕ್ಷಕರ ಅಭಿಪ್ರಾಯವಾಗಿದೆ.

ಒಂದನೇ ತರಗತಿಯಲ್ಲಿರುವ ಒಂದು ಮಗುವಿನಿಂದ ಏನು ನಿರೀಕ್ಷಿಸಲು ಸಾಧ್ಯವಾಗುತ್ತದೆ? ಕಳೆದ ಒಂದೂವರೆ ವರ್ಷದಿಂದ ಶಾಲೆಗೇ ಹೋಗದಿದ್ದ ಈ ಮಗು, ತನ್ನ ಶಿಕ್ಷಕಿ ಯಾರು ಎಂಬುದನ್ನು ಬಹುತೇಕ ನೋಡದೇ ಇದ್ದ ಮಗು, ಕೋವಿಡ್-19 ಎಂದರೆ ಏನು ಎಂಬುದನ್ನೇ ತಿಳಿಯದಿದ್ದ ಮಗು, ಆಕೆಯ ಬಾಲ್ಯ ಮಣ್ಣಿನಲ್ಲಿ ಆಡುವುದರಲ್ಲೇ ಕಳೆದು ಹೋಗಿರುತ್ತದೆ ಮತ್ತು ಅಲ್ಪಸ್ವಲ್ಪ ಕಲಿತಿದ್ದೂ ಆಕೆಗೆ ಮರೆತು ಹೋಗಿರುತ್ತದೆ. ಇಂತಹ ಮಗು ಏಕಾಏಕಿ ಯಾವುದೇ ಬೆಂಬಲ ಇಲ್ಲದೆ ಓದುವುದು ಮತ್ತು ಬರೆಯುವುದನ್ನು ಪುನರಾರಂಭ ಮಾಡಲಿ ಎಂದು ನಿರೀಕ್ಷಿಸಲು ಸಾಧ್ಯವೇ? ಆಕೆಗೊಂದು ವರ್ಕ್‌ಶೀಟ್ ನೀಡಿದರೆ ಆಕೆ ತನ್ನ ಸ್ವಂತ ಸಾಮರ್ಥ್ಯದಿಂದ ಉತ್ತರ ನೀಡಲು ಸಾಧ್ಯವೇ? ಅಥವಾ ನೀವು ಫೋನ್ನಲ್ಲಿ ವಿಡಿಯೋ ಪ್ಲೇ ಮಾಡಿ ಆಕೆಯ ಮುಂದೆ ಹಿಡಿದರೆ ಆಕೆ ತಾನಾಗಿಯೇ ವಿಷಯವನ್ನು ತಿಳಿದುಕೊಳ್ಳಲು ಆರಂಭಿಸುತ್ತಾಳೆಯೇ?

### ಸುಲಭದ ಮಾತಲ್ಲ

ಈ ಸಾಂಕ್ರಾಮಿಕದ ಅವಧಿಯಲ್ಲಿ ಆಗಿರುವ ಹಾನಿಯನ್ನು ಸರಿದೂಗಿಸಿದ ನಂತರವಷ್ಟೇ ಮಕ್ಕಳ ಮುಂದಿನ ಅಧ್ಯಯನದ ಬಗ್ಗೆ ಯೋಜನೆ ರೂಪಿಸಬೇಕು. ಇದರಿಂದ ಮಾತ್ರ ನಾವು ನಿಜ ಅರ್ಥದಲ್ಲಿ ಅವರಿಗೆ ಸಹಾಯ ಮಾಡಲು ಸಾಧ್ಯವಾಗುತ್ತದೆ. ಶಿಕ್ಷಕರು ಮಕ್ಕಳ ಮಟ್ಟದಲ್ಲಿ ಅವರ ಜೊತೆ ಸಂಪರ್ಕವನ್ನು ಸಾಧಿಸಬೇಕು. ಮಕ್ಕಳ ಸಾಮಾಜಿಕ, ಕೌಟುಂಬಿಕ, ಮಾನಸಿಕ ಮತ್ತು ದೈಹಿಕ ಸ್ಥಿತಿಯನ್ನು ಗಮನದಲ್ಲಿ ಇಟ್ಟುಕೊಂಡು ಭವಿಷ್ಯದ ಯೋಜನೆಯನ್ನು ಕೈಗೊಳ್ಳಬೇಕಾಗುತ್ತದೆ. ಕಳೆದ ಒಂದೂವರೆ ವರ್ಷದಲ್ಲಿ ಮಕ್ಕಳ ಮೇಲೆ ವಿಭಿನ್ನ ರೀತಿಯ ಪರಿಣಾಮಗಳು ಬೀರಿರುತ್ತವೆ, ಹಾಗಾಗಿ ಅವರ ಶೈಕ್ಷಣಿಕ ನಷ್ಟ ಕೂಡ ವಿಭಿನ್ನವಾಗಿರುತ್ತದೆ. ಈ ಕಾರಣದಿಂದ ಶಿಕ್ಷಕರು ಪ್ರತಿಯೊಂದು ಮಗುವಿಗೂ ಕೂಡ ಪ್ರತ್ಯೇಕವಾಗಿ ಯೋಜನೆ ರೂಪಿಸಬೇಕಾಗಬಹುದು. ಮಕ್ಕಳು ಮಾತ್ರವಲ್ಲದೆ ಅವರ ಪಾಲಕರ ಜೊತೆಗೂ ಶಿಕ್ಷಕರು ನಿರಂತರ ಸಂಪರ್ಕದಲ್ಲಿರಬೇಕು. ಗ್ರಾಮದಲ್ಲಿರುವ ಶಿಕ್ಷಿತರು ಕೂಡ ಶಿಕ್ಷಕರಿಗೆ ಸಹಾಯ ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಬಹುದು. ಕೋವಿಡ್-19 ಅಗತ್ಯಗಳಿಗೆ ತಕ್ಕಂತೆ ಎಲ್ಲ ಸುರಕ್ಷತಾ ಕ್ರಮಗಳನ್ನು ಪಾಲಿಸುವುದರ ಮೂಲಕ ಶಿಕ್ಷಕರು ಮಕ್ಕಳೊಂದಿಗೆ ಮುಖಾಮುಖಿಯಾಗುವ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು. ಇವೆಲ್ಲವನ್ನೂ ಸೂಕ್ತ ಯೋಜನೆಯ ಮೂಲಕವೇ ಮಾಡಬೇಕು.

## ಕಲಿಕೆಯ ನಷ್ಟ

ಕಳೆದ ಬಹುತೇಕ ಎರಡು ವರ್ಷಗಳ ಅವಧಿಯಲ್ಲಿ ಕಲಿಕೆ ಮತ್ತು ಬೋಧನೆ ಕಾರ್ಯವು ಸುಗಮವಾಗಿ ನಡೆಯದ ಕಾರಣ ಆರಂಭದಲ್ಲಿ ತಕ್ಕಮಟ್ಟಿಗೆ ಸಮಸ್ಯೆ ಉಂಟಾಗಬಹುದಾದರೂ ಅದು ಅನಿವಾರ್ಯ. ಮಕ್ಕಳು ನಿಯಮಿತವಾದ ಶಾಲಾ

ವೇಳಾಪಟ್ಟಿ ಮತ್ತು ಅಭ್ಯಾಸಕ್ಕೆ ತೊಡಗಿಕೊಳ್ಳಲು ಒಂದಷ್ಟು ಸಮಯವೇ ಬೇಕಾಗುತ್ತದೆ. ಆರಂಭಿಕ ಹಂತದಲ್ಲಿ ಶಿಕ್ಷಕರು ನಾನಾ ರೀತಿಯ ಚಟುವಟಿಕೆಗಳ ಮೂಲಕ ಮಕ್ಕಳನ್ನು ತೊಡಗಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ಮಕ್ಕಳು ಅನುಭವಿಸಿದ ಕಲಿಕಾ ನಷ್ಟತೆಯಿಂದ ಚೇತರಿಸಿಕೊಳ್ಳುವಂತೆ ಮತ್ತು ತಮ್ಮ ಕಲಿಕೆಯನ್ನು ಇನ್ನಷ್ಟು ತೀವ್ರಗೊಳಿಸುವಂತಹ ಚಟುವಟಿಕೆಗಳನ್ನು ಅವರು ಕಂಡುಕೊಳ್ಳಬೇಕು. ಶಾಲೆ ಪುನರಾರಂಭವಾದ ಬಳಿಕ ಶಿಕ್ಷಕರು ಕೂಡ ತಾವು ಕಲಿಸುವ ರೀತಿಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಳ್ಳಬೇಕಾದ ಅಗತ್ಯವಿದೆ.

ಇತ್ತೀಚಿನ ನನ್ನ ಕ್ಷೇತ್ರ ಭೇಟಿಯ ಸಂದರ್ಭದಲ್ಲಿ ನಾನು ಶಿಕ್ಷಕರಲ್ಲಿ ಒಬ್ಬರಾದ ಶಿವಕುಮಾರ್ (ಸರ್ಕಾರಿ ಪ್ರಾಥಮಿಕ ಶಾಲೆ, ಮೈಲಗೋಡ್) ಅವರಲ್ಲಿ ಈ ಕುರಿತು ಮಾತನಾಡಿದೆ. ಅವರು ಹೇಳಿದ್ದು ಏನೆಂದರೆ; "ಶಾಲೆಗಳು ಮತ್ತೆ ಆರಂಭವಾಗುತ್ತವೆ, ಮಕ್ಕಳು ಶಾಲೆಗೆ ಮತ್ತೆ ಬರಲು ಆರಂಭಿಸುತ್ತಾರೆ, ಬೋಧನೆ ಮತ್ತು ಕಲಿಕೆ ಹಿಂದಿನಂತೆ ಸರಾಗವಾಗಿ ಮುಂದುವರಿಯುತ್ತದೆ. ಇವೆಲ್ಲವೂ ತುಂಬಾ ಸುಲಭ ಎಂದು ಸರ್ಕಾರ ಮತ್ತು ಜನರು ಭಾವಿಸಿದಂತಿದೆ."

ಆದರೆ ಅದು ಅಷ್ಟು ಸುಲಭದ ಕೆಲಸ ಅಲ್ಲ ಎನ್ನುತ್ತಾ ಅವರು, "ಸುದೀರ್ಘ ಕಾಲ ಶಾಲೆಗಳು ಮುಚ್ಚಿರುವುದು ಮಾನಸಿಕವಾಗಿ, ದೈಹಿಕವಾಗಿ ಮತ್ತು ಭಾವನಾತ್ಮಕವಾಗಿ ಮಕ್ಕಳ ಮೇಲೆ ಪರಿಣಾಮ ಬೀರಿದೆ. ಮಕ್ಕಳು ಸುದೀರ್ಘ ಅವಧಿ ಒಂದೇ ಕಡೆ ಕುಳಿತು ಏಕಾಗ್ರತೆಯಿಂದ ಕೇಳುವ ಮತ್ತು ಗ್ರಹಿಸುವ ಅಭ್ಯಾಸವನ್ನು ಕಳೆದುಕೊಂಡಿದ್ದಾರೆ. ಇದು ಅವರಿಗೆ ಸವಾಲಾಗಿ ಪರಿಣಮಿಸಲಿದೆ. ಜೊತೆಗೆ ಶಿಕ್ಷಕರಿಗೂ ಕೂಡ ಮಕ್ಕಳು ತರಗತಿಯಲ್ಲಿ ಗಮನ ನೀಡುವಂತೆ ಮಾಡುವುದು ಕಷ್ಟವಾಗಲಿದೆ"

**ಇತರ ನಷ್ಟಗಳ ಪರಿಣಾಮ**

ಸುಮಾರು ಒಂದೂವರೆ ವರ್ಷಗಳಿಂದ ಯಾವುದೇ ರೀತಿಯ ಸಾಮಾಜಿಕ ಸಂವಹನವನ್ನು ನಡೆಸದ ಮಕ್ಕಳು ಶಾಲೆ ಆರಂಭವಾದ ದಿನಗಳಲ್ಲಿ ಶಿಕ್ಷಕರ ಜೊತೆ ಸಂವಹನ ನಡೆಸಲು ಕಷ್ಟಪಡಬಹುದು. ಈ ಹಿಂದೆ ಅವರು ತರಗತಿಯಲ್ಲಿ ಎಲ್ಲರ ಸಮ್ಮುಖದಲ್ಲಿ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತಿದ್ದರು. ಈಗ ಅದು ಕಷ್ಟವಾಗಿ ಪರಿಣಮಿಸಬಹುದು.

ಹಣಕಾಸಿನ ತೊಂದರೆಯನ್ನು ಎದುರಿಸುತ್ತಿರುವ ಅನೇಕ ಕುಟುಂಬಗಳು ತಮ್ಮ ಮಕ್ಕಳಿಗೆ ಒಂದು ಹೊತ್ತಿನ ಪೌಷ್ಟಿಕ ಆಹಾರವಾದರೂ ಸಿಗಲಿ ಎಂಬ ಉದ್ದೇಶದಿಂದ ಸರ್ಕಾರಿ ಶಾಲೆಗೆ ಕಳುಹಿಸುತ್ತಿರುವುದು ರಹಸ್ಯವೇನೂ ಅಲ್ಲ. ಶಾಲೆಗಳು ಮುಚ್ಚಿರುವುದರಿಂದ ಇಂತಹ ಕುಟುಂಬಗಳ ಮಕ್ಕಳು ದೈಹಿಕವಾಗಿ ಸಾಕಷ್ಟು ಸೊರಗಿದ್ದಾರೆ ಕೂಡ. ಶಾಲೆಗಳು ಪುನರಾರಂಭವಾದ ಬಳಿಕ ಮಕ್ಕಳಿಗೆ ಮಧ್ಯಾಹ್ನದ ಊಟದಲ್ಲಿನ ಪೌಷ್ಟಿಕಾಂಶವನ್ನು ಇನ್ನಷ್ಟು ಹೆಚ್ಚಿಸುವ ಬಗ್ಗೆ ಮತ್ತು ಉತ್ತಮ ಆಹಾರವನ್ನು ನೀಡುವ ಬಗ್ಗೆ ಸರ್ಕಾರ ಗಮನ ನೀಡಬೇಕಾಗಿದೆ. ಈ ಎಲ್ಲ ಕಾರಣದಿಂದಾಗಿ ಒಟ್ಟಾರೆ ಅತ್ಯಂತ ಸಂಕೀರ್ಣ ಸ್ಥಿತಿ ನಮ್ಮ ಮುಂದೆ ಇದೆ. ಹಾಗಾಗಿ ಶಾಲೆ ಪುನರಾರಂಭವಾದಾಗ ನಾವು ಈ ಎಲ್ಲ ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ಕಾರ್ಯನಿರ್ವಹಿಸಬೇಕಾಗಿದೆ. ಹಿಂದಿನ ಚಟುವಟಿಕೆಗಳಿಗೆಲ್ಲ ಮತ್ತೆ ಚಾಲನೆ ಸಿಗುವಂತೆ ಮತ್ತು ನಾವು ಒಂದು ನಿಶ್ಚಿತವಾದ ಯೋಜನೆಯಂತೆ ಮಕ್ಕಳೊಂದಿಗೆ ಕೆಲಸ ಮಾಡಲು ಸಾಧ್ಯವಾಗುವಂತೆ ನಿರ್ಧಾರ ಕೈಗೊಳ್ಳಬೇಕು. ಇದು ಕೇವಲ ಒಬ್ಬ ಶಿಕ್ಷಕರ ಕಳವಳವಲ್ಲ. ನಾನು ಭೇಟಿ ಮಾಡಿದ ಅನೇಕ ಶಿಕ್ಷಕರು ಇದೇ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಅದೇ ರೀತಿ ಮಕ್ಕಳನ್ನು ಭೇಟಿ ಮಾಡಿದಾಗ ಅವರು ಈ ಶಾಲಾ ರಹಿತ ದಿನಗಳಿಂದ ಎಷ್ಟರ ಮಟ್ಟಿಗೆ ತೊಂದರೆ ಅನುಭವಿಸಿದ್ದಾರೆ ಎನ್ನುವುದು ಸ್ಪಷ್ಟವಾಗಿ ಕಾಣುತ್ತಿತ್ತು. ಇದು ಕೇವಲ ಮಕ್ಕಳ

ಶೈಕ್ಷಣಿಕ ನಷ್ಟ ಮಾತ್ರವಾಗಿದ್ದರೆ ಅದನ್ನು ನಿಭಾಯಿಸುವುದು ಮಕ್ಕಳಿಗೆ ಅಷ್ಟೇನೂ ಕಷ್ಟದ ಕೆಲಸವಾಗಿರಲಿಲ್ಲ. ಕಲಿಕಾ ನಷ್ಟದ ಜೊತೆಗೆ ಇತರ ಇನ್ನೂ ಅನೇಕ ಪ್ರಮುಖ ನಷ್ಟಗಳು ಮಕ್ಕಳ ಒಟ್ಟಾರೆ ಬೆಳವಣಿಗೆಯನ್ನು ಕುಂಟಿತಗೊಳಿಸುವಂತೆ ಮಾಡಿದ್ದು, ಇದು ಕೂಡ ಅವರ ಶೈಕ್ಷಣಿಕ ಕಲಿಕೆಯ ಮೇಲೆ ಪರಿಣಾಮ ಬೀರುವಂತಾಗಿದೆ.

**ಮುಂದಿನ ದಾರಿ: ಒಂದಷ್ಟು ಚಿಂತನೆ**

ಇಲ್ಲಿಯ ತನಕ ನಾವು ಎದುರಿಸಬಹುದಾದ ಸವಾಲುಗಳ ಬಗ್ಗೆ ಚರ್ಚೆ ಮಾಡಿದೆವು. ನಾನು ಶಿಕ್ಷಕರ ಜೊತೆ ಮಾತುಕತೆ ನಡೆಸಿದ ಸಂದರ್ಭದಲ್ಲೆಲ್ಲ ಈ ಎಲ್ಲ ಸವಾಲುಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಕೂಡ ಮಾಡಿದೆ. ಶಾಲೆಗಳು ಪುನರಾರಂಭವಾದಾಗ ಮಕ್ಕಳನ್ನು ಹೇಗೆ ತೊಡಗಿಸಿಕೊಳ್ಳಬೇಕು ಎನ್ನುವ ಬಗ್ಗೆ ಅವರ ಹಂತದಲ್ಲಿ ಯಾವೆಲ್ಲ ಸಿದ್ಧತೆಗಳನ್ನು ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿದುಕೊಳ್ಳುವ ಪ್ರಯತ್ನವನ್ನೂ ನಡೆಸಿದೆ. ಶಾಲಾ ಪುನರಾರಂಭದ ಕಷ್ಟಗಳಿಗೆ ಸಿದ್ಧತೆಗಳನ್ನು ಮಾಡಿಕೊಳ್ಳುವುದರಲ್ಲಿ ಅನೇಕ ಶಿಕ್ಷಕರು ತೊಡಗಿರುವಾಗಲೇ ಕೆಲವರು ತಮ್ಮ ತಮ್ಮ ಮಟ್ಟದಲ್ಲಿ ಕೆಲವು ಯೋಜನೆಗಳನ್ನು ಮಾಡುತ್ತಿರುವುದು ಕಂಡುಬಂತು. ಕೆಲವನ್ನು ಇಲ್ಲಿ ಚರ್ಚಿಸಲಾಗಿದೆ.

*ವೈಯಕ್ತಿಕ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವುದು:*

ಈ ನಿಟ್ಟಿನಲ್ಲಿ ಯೋಚನೆ ಮಾಡಬಹುದಾದ ಮಾರ್ಗಗಳಲ್ಲಿ ಒಂದೆಂದರೆ, ಶಾಲೆಗಳು ಮತ್ತೆ ತೆರೆಯುವುದಕ್ಕೆ ಮೊದಲೇ ಶಿಕ್ಷಕರು ಮಕ್ಕಳ ಮನೆಗಳಿಗೆ ತೆರಳಿ ಅವರನ್ನು ಭೇಟಿ ಮಾಡುವುದು. ಇಂತಹುದೊಂದು ಭೇಟಿಯು ಕೇವಲ ಂಮನೆಗೆಲಸ ನೀಡುವುದು ಮತ್ತು ವರ್ಕ್ಶೀಟ್ಗಳನ್ನು ಪಡೆದುಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಬಾರದು. ಶಿಕ್ಷಕರು ಮಕ್ಕಳು ಮತ್ತು ಅವರ ಪಾಲಕರ ಜೊತೆ ವಿಸ್ತೃತವಾದ ಮಾತುಕತೆಯನ್ನು ನಡೆಸಬೇಕು. ಕೋವಿಡ್-19 ಅವರ ಮೇಲೆ ಮತ್ತು ಮಕ್ಕಳ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿತು, ಶಾಲೆಗಳು ಮುಚ್ಚಿರುವುದರಿಂದ ಮಕ್ಕಳು ಏನೆಲ್ಲ ಸಂಗತಿಗಳನ್ನು ಎದುರಿಸಬೇಕಾಯಿತು, ಅವರ ಬದುಕಿನಲ್ಲಿ ಏನೆಲ್ಲ ಬದಲಾವಣೆಗಳು ಉಂಟಾಯಿತು ಮತ್ತು ಈಗ ಅವರು ಶಾಲೆಯಿಂದ ಏನನ್ನು ನಿರೀಕ್ಷಿಸುತ್ತಿದ್ದಾರೆ ಎಂಬೆಲ್ಲ ವಿಷಯಗಳನ್ನು ಮುಕ್ತವಾಗಿ ಚರ್ಚಿಸಬಹುದಾಗಿದೆ. ಒಬ್ಬ ಶಿಕ್ಷಕಿಯು ತಾನು ಕಲಿಸಿದ ಮಗುವಿನ ಜೊತೆ ಹೀಗೆ ಮಾತನಾಡಿದಾಗ ಆ ಮಗುವಿನಲ್ಲಿ ಏನು ಬದಲಾವಣೆಗಳು ಉಂಟಾಗಿವೆ ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಮಗುವು ಆರಂಭದಲ್ಲಿ ಶಿಕ್ಷಕಿಯ ಜೊತೆ ಮಾತನಾಡಲು ಹಿಂಜರಿಯಬಹುದು. ಹಾಗಾಗಿ ಶಿಕ್ಷಕಿಯು ಆಗಾಗ ಮಕ್ಕಳನ್ನು ಭೇಟಿ ಮಾಡಬೇಕು. ಇದರಿಂದ ಮಕ್ಕಳು ಮುಕ್ತವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ.

*ಮಕ್ಕಳ ಸಣ್ಣ ಗುಂಪಿನೊಂದಿಗೆ ತೊಡಗಿಕೊಳ್ಳುವುದು:*

ಎರಡನೇ ಕ್ರಮ ಏನೆಂದರೆ ಶಿಕ್ಷಕರು ಮಕ್ಕಳ ಸಣ್ಣ ಗುಂಪನ್ನು ರಚಿಸಿ ಅವರು ಶಾಲೆಗೆ ಬರುವಂತೆ ವಿನಂತಿಸಬೇಕು. ಅಲ್ಲಿ ಅವರು ಕ್ರೀಡೆ ಸೇರಿದಂತೆ ಅನೇಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಬಹುದು. ಕೇವಲ ವರ್ಕ್ಶೀಟ್ ಪರಿಹರಿಸಲು ಮಾತ್ರ ಮಕ್ಕಳನ್ನು ಶಾಲೆಗೆ ಕರೆಯಬಾರದು. ಶಿಕ್ಷಕರು ಅವರೊಂದಿಗೆ ಕುಳಿತುಕೊಂಡು ಸಿನೆಮಾ ವೀಕ್ಷಿಸಬೇಕು, ಅವರು ಹೇಳುವ ಕಥೆಗಳನ್ನು ಕೇಳಬೇಕು ಮತ್ತು ಅವರಿಗೆ ಕಥೆಗಳನ್ನು ಹೇಳಬೇಕು. ಶಿಕ್ಷಕಿ ಅವರೊಂದಿಗೆ ಮಾತನಾಡಬೇಕು, ಅವರೊಂದಿಗೆ ಉದ್ಯಾನದ ಸುತ್ತ ನಡೆದಾಡಬೇಕು, ಅಲ್ಲಿರುವ ಗಿಡಗಳು ಮತ್ತು ಪ್ರಾಣಿಗಳ ಬಗ್ಗೆ ಮಾತನಾಡಬೇಕು. ಈಗಲೂ ಕೆಲವು ಮಕ್ಕಳಿಗೆ ಕೋವಿಡ್-19 ಎಂದರೆ ಏನು ಎಂಬುದು ಅರ್ಥವಾಗಿರುವುದಿಲ್ಲ ಅಥವಾ ಶಾಲೆಗಳು ಯಾಕೆ ಮುಚ್ಚಿವೆ ಅಥವಾ ಲಸಿಕೆಗಳು ಹೇಗೆ ಕೆಲಸ ಮಾಡುತ್ತವೆ ಎನ್ನುವುದು ತಿಳಿದಿರುವುದಿಲ್ಲ. ಶಿಕ್ಷಕರು

ಇವೆಲ್ಲವನ್ನೂ ಸಮರ್ಪಕವಾಗಿ ಮತ್ತು ಸರಳ ಭಾಷೆಯಲ್ಲಿ ಅನಿಮೇಷನ್, ನಾಟಕ ಅಥವಾ ಮಾದರಿಗಳ ಮೂಲಕ ತಿಳಿಸಿಹೇಳಬೇಕು. ಲಸಿಕೆ ಬಗ್ಗೆ ನಮ್ಮ ಸಮಾಜದಲ್ಲಿ ಇನ್ನೂ ತಪ್ಪು ಕಲ್ಪನೆಗಳು ಇರುವುದರಿಂದ ಇದು ಮಕ್ಕಳ ಮೇಲೂ ಪರಿಣಾಮ ಬೀರುವುದರಿಂದ ಶಿಕ್ಷಕರು ಮಕ್ಕಳಿಗೆ ಮನವರಿಕೆ ಮಾಡಿಸುವುದು ಅತ್ಯಂತ ಮುಖ್ಯವಾಗಿದೆ. ಅವರಲ್ಲಿನ ತಪ್ಪು ಕಲ್ಪನೆಗಳನ್ನು ಈ ಹಂತದಲ್ಲಿ ನಿವಾರಿಸದೇ ಹೋದರೆ ಮುಂದೆ ಅವರಿಗೂ ಲಸಿಕೆ ಪಡೆದುಕೊಳ್ಳುವ ಸಮಯ ಬಂದಾಗ ಅವರು ಅದಕ್ಕೆ ಸಿದ್ಧರಾಗಿರುವುದಿಲ್ಲ.

**ಮಕ್ಕಳು ಏನನ್ನು ಬಯಸುತ್ತಿದ್ದಾರೆ?**

ನಾವು ಕೆಲವೊಮ್ಮೆ ಮಕ್ಕಳ ಅಭಿಪ್ರಾಯಗಳನ್ನು ಮತ್ತು ಅವರ ಯೋಚನೆಗಳನ್ನು ಕಡೆಗಣಿಸುತ್ತೇವೆ. ಒಂದು ಕಡೆ ನಾವು ಮಕ್ಕಳಿಗೆ ಪಾಠ ಹೇಳುವ ಸಂದರ್ಭದಲ್ಲಿ ಅವರೂ ಕೂಡ ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಅರ್ಥ ಮಾಡಿಕೊಳ್ಳಬೇಕು ಎಂದು ಹೇಳುತ್ತೇವೆ. ಆದರೆ ಇನ್ನೊಂದು ಕಡೆ, ಅವರಿಗಾಗಿಯೇ ಮಾಡುವ ಕೆಲಸದಲ್ಲಿ ಅವರ ಅಭಿಪ್ರಾಯಗಳನ್ನು ಪಡೆಯಬೇಕಾದ ಅವಶ್ಯಕತೆಗಳನ್ನೇ ಮರೆಯುತ್ತೇವೆ. ಶಾಲೆಗಳು ಪುನರಾರಂಭವಾಗುತ್ತಿರುವ ಹೊತ್ತಿನಲ್ಲಿ ಅವರ ಅಭಿಪ್ರಾಯಗಳೇನು ಮತ್ತು ಅವರು ಏನು ಅರ್ಥಮಾಡಿಕೊಂಡಿದ್ದಾರೆ, ಅವರಿಗೆ ಏನು ಬೇಕು ಎಂಬುದನ್ನು ನಾವು ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಬೇಕು. ಶಾಲೆಗಳು ತೆರೆಯಬೇಕು ಎಂದು ಅವರು ಬಯಸುತ್ತಿದ್ದಾರೆಯೇ ಮತ್ತು ಅವರು ಹಿಂದಿನಂತೇ ಶಾಲೆಗೆ ಹೋಗಲು ಸಿದ್ಧರಿದ್ದಾರೆಯೇ ಎಂಬುದನ್ನು ತಿಳಿದುಕೊಳ್ಳಬೇಕು. ಇಂತಹ ವಿಚಾರಗಳನ್ನು ಮಕ್ಕಳಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ, ಹಾಗಾಗಿ ಅವರ ಅಭಿಪ್ರಾಯಗಳು ಮುಖ್ಯವಲ್ಲ ಎಂದು ನಮ್ಮಲ್ಲಿ ಕೆಲವರು ಭಾವಿಸಬಹುದು. ಮಕ್ಕಳಿಗೆ ಸ್ಪಷ್ಟವಾದ ಕಾರಣಗಳು ಇಲ್ಲದೇ ಇರಬಹುದು, ಆದರೆ ಅವರು ತಮ್ಮ ಮಟ್ಟದಲ್ಲಿ ಏನು ಯೋಚಿಸುತ್ತಿದ್ದಾರೆ ಎನ್ನುವುದನ್ನು ಹಂಚಿಕೊಳ್ಳಬಹುದು.

ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನಾನು ಅನೇಕ ಮಕ್ಕಳ ಜೊತೆ ಮಾತನಾಡಿದೆ ಮತ್ತು ಶಾಲೆ ಪುನರಾರಂಭದ ಬಗ್ಗೆ ಅವರ ಅಭಿಪ್ರಾಯಗಳನ್ನು ಪಡೆದುಕೊಳ್ಳುವ ಪ್ರಯತ್ನವನ್ನು ಮಾಡಿದೆ. ಅವರ ಅಭಿಪ್ರಾಯಗಳನ್ನು ಇಲ್ಲಿ ಹಂಚಿಕೊಳ್ಳಲು ಬಯಸುತ್ತೇನೆ. ಇವುಗಳು ಕೇವಲ ಉದಾಹರಣೆಗಳು ಮಾತ್ರ. ನಾನು ಅಂತಹ ಅನೇಕ ಮಕ್ಕಳನ್ನು ಭೇಟಿ ಮಾಡಿದೆ; ಅವರಿಗೆ ತಮ್ಮ ಶಾಲೆ ಮತ್ತೆ ಆರಂಭವಾಗುವ ಬಗ್ಗೆ ತೀವ್ರವಾದ ಕಾತರವಿದೆ. ಎಲ್ಲವೂ ಮಾಮೂಲು ಸ್ಥಿತಿಗೆ ಬಂದರೆ ಶಾಲೆಯಲ್ಲಿ ಹಿಂದಿನಂತೆ ಖುಷಿಯಾಗಿ ಕಳೆಯಬಹುದು ಎಂಬುದು ಅವರ ಅಭಿಪ್ರಾಯವಾಗಿದೆ.

ಸರ್, ಕೊರೊನಾ ಸಮಯದಲ್ಲಿ ನಾವು ಎಲ್ಲವನ್ನೂ ಮರೆತುಬಿಟ್ಟಿದ್ದೇವೆ. ಶಾಲೆ ಮುಚ್ಚಿದೆ, ನಾವು ಇಡೀ ದಿನ ಮನೆಯಲ್ಲಿಯೇ ಇರಬೇಕಾಗಿ ಬಂದಿದೆ. ಇದರಿಂದ ನಮಗೆ ತೀರಾ ಬೇಸರ ಬಂದುಹೋಗಿದೆ. ನಾವು ಶಾಲೆಗೆ ಹೋಗುತ್ತಿದ್ದರೆಅಲ್ಲಿ ನಮ್ಮ ಸ್ನೇಹಿತರೊಂದಿಗೆ ಆಟವಾಡಬಹುದಿತ್ತು, ಸಂತೋಷದಿಂದ ಕಾಲ ಕಳೆಯಬಹುದಿತ್ತು. ಶಾಲೆಗೆ ಹೋಗುವಾಗ ಮತ್ತು ಬರುವಾಗಲೂ ನಾವು ಸ್ನೇಹಿತರ ಜೊತೆ ಆಟವಾಡಿಕೊಂಡೇ ಬರುತ್ತಿದ್ದೆವು. ಶಿಕ್ಷಕರು ಕೂಡ ನಮ್ಮಿಂದ ಅನೇಕ ಆಟಗಳನ್ನು ಆಡಿಸುತ್ತಿದ್ದರು. ಶಾಲೆಗಳು ಮತ್ತೆ ಬೇಗ ಆರಂಭವಾಗಲಿ. ನಾವು ಮತ್ತೆ ಸ್ನೇಹಿತೆಯರೊಂದಿಗೆ ಆಟವಾಡಿಕೊಂಡು, ವಿನೋದದಿಂದ ಕಾಲಕಳೆಯಬಹುದು.

-ವಿಮಲಾ, ಐದನೇ ತರಗತಿ.

ಶಾಲೆ ಮುಚ್ಚುವ ಹೊತ್ತಿಗೆ ನಾನು ತುಂಬಾ ಮನೆಗೆಲಸಗಳನ್ನು ಮಾಡಬೇಕಾಗಿತ್ತು. ನಾನು ಮನೆಯಲ್ಲಿಯೇ ಇರುತ್ತಿದ್ದೆ, ಹೊರಗಡೆ ಹೋದರೆ ಅಪ್ಪ-ಅಮ್ಮ ಜೋರುಮಾಡುತ್ತಿದ್ದರು. ಗೆಳತಿಯರೊಂದಿಗೆ ಓಡುವುದೆಂದರೆ ನನಗೆ ಖುಷಿ.

ಶಾಲೆಯಿಂದ ಮನೆಗೆ ವಾಪಸು ಬರುವಾಗ ಗೆಳತಿಯರೊಂದಿಗೆ ಸೇರಿ ಬಿಸ್ಕೆಟ್ ಖರೀದಿ ಮಾಡುತ್ತಿದ್ದೆ. ಟೀಚರ್ ಕೂಡ ನಮಗೆ ತಿನ್ನಲು ಅನೇಕ ತಿಂಡಿಗಳನ್ನು ಕೊಡುತ್ತಿದ್ದರು. ಈಗ ಅದೂ ಕೂಡ ಇಲ್ಲದಾಗಿದೆ. ಶಾಲೆ ಮತ್ತೆ ಆರಂಭವಾದರೆ ಟೀಚರ್‌ರಿಂದ  ತಿಂಡಿ ಕೊಡುವಂತೆ ಕೇಳಿ ತಿನ್ನಬಹುದು.

-ವಂದನಾ, ನಾಲ್ಕನೇ ತರಗತಿ.

ಸರ್, ಶಾಲೆಯಲ್ಲಿ ನಮಗೆ ಎಷ್ಟು ಮಜಾ ಇರುತ್ತಿತ್ತು. ಟೀಚರ್ ಜೊತೆಗೂ ಖುಷಿಯಾಗಿ ಇರುತ್ತಿದ್ದೆವು. ಶಾಲೆಯಲ್ಲಿ ಓದುವುದು, ಪಾಠ ಕೇಳುವುದು, ಆಟವಾಡುವುದು ಎಲ್ಲವೂ ನಮಗೆ ಖುಷಿಯೇ. ಶಾಲೆಯಲ್ಲಿ ನಾವು ಒಬ್ಬರಿಗೊಬ್ಬರು ತಿಂಡಿಗಳನ್ನು ಹಂಚಿಕೊಂಡು ತಿನ್ನುತ್ತಿದ್ದೆವು. ಶಾಲೆಯಲ್ಲಿ ಪ್ರಾರ್ಥನೆ ಮಾಡುತ್ತಿದ್ದೆವು. ಶಾಲೆ ಮತ್ತೆ ಆರಂಭವಾದರೆ ನಾವು ಇವೆಲ್ಲವನ್ನೂ ಮತ್ತೆ ಮಾಡಬಹುದು.

-ಉಮ್ಮೈದ್, ನಾಲ್ಕನೇ ತರಗತಿ.

**ನವಲೇಶ್ ಕುಮಾರ್** ಅವರು ಮೆಕ್ಯಾನಿಕಲ್ ಎಂಜಿನಿಯರ್. ಸಾಮಾಜಿಕ ಕಾರ್ಯದಲ್ಲಿ ತೊಡಗಿಕೊಳ್ಳಬೇಕು ಮತ್ತು ಶಿಕ್ಷಣದ ಮೂಲಕ ಸಾಮಾಜಿಕ ಪರಿವರ್ತನೆಯನ್ನು ತರಬೇಕು ಎನ್ನುವ ಕಳಕಳಿಯಿಂದ ಅವರು 2020ರಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ್ನು ಸೇರಿಕೊಂಡರು. ಅವರಿಗೆ ನಾನಾ ರೀತಿಯ ಸಾಮಾಜಿಕ ವಿಷಯಗಳ ಬಗ್ಗೆ ಓದುವುದು ಮತ್ತು ಬರೆಯುವುದರಲ್ಲಿ ಅತೀವವಾದ ಆಸಕ್ತಿ. ಅವರು ಆಗಾಗ ರಕ್ತದಾನವನ್ನೂ ಮಾಡುತ್ತಾರೆ. ಅವರನ್ನು ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದಾಗಿದೆ: nawlesh.kumar@azimpremjifoundation.org